ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದಪ್ರಶ್ನೆಸಂಖ್ಯೆ : 1103

ಸದಸ್ಯರ ಹೆಸರು : ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 22-12-2021

ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಸಾಕಷ್ಟು ಬೆಳೆಗಾರರಿಗೆ ಸರ್ಕಾರ ನೀಡಿದ ಅವಧಿಯೊಳಗೆ ಪಹಣಿ ಪತ್ರದಲ್ಲಿ ಮೊಬೈಲ್ ಮೂಲಕ ಬೆಳೆ ನಮೂದು ಮಾಡುವುದು ತಾಂತ್ರಿಕ ಕಾರಣಗಳಿಂದಾಗಿ ಸಾಧ್ಯವಾಗದೆ ತೊಂದರೆಯಾಗಿರುವುದು ಸರ್ಕಾರದಗಮನಕ್ಕೆಬಂದಿದೆಯೇ: | ಪ್ರತಿ ಹಂಗಾಮಿನ ಬೆಳೆ ಸಮೀಕ್ಷೆ ಕಾರ್ಯ ಪೂರ್ಣಗೊಂಡು ದತ್ತಾಂಶದ ಕ್ರೋಢೀಕರಣ ಮತ್ತು ಮರು ಹೊಂದಾಣಿಕೆ ಚಟುವಟಿಕೆ ಮುಗಿದ ಕೂಡಲೇ ಸಂಬಂಧಪಟ್ಟ ಇಲಾಖೆಗಳಿಂದ ಅನುಮೋದಿಸಲ್ಪಟ್ಟ ಬೆಳೆ ಸಮೀಕ್ಷೆ ದತ್ತಾಂಶವನ್ನು ಪಹಣಿಗಳಲ್ಲಿ ಇಂದೀಕರಿಸಲು ಭೂಮಿ ಕೋಶದವರಿಗೆ ಮಾಹಿತಿಯನ್ನು ಒದಗಿಸಲಾಗುವುದು. ಅದರಂತೆ, 2020-21ರ ಮುಂಗಾರು, ಹಿಂಗಾರು ಮತ್ತು ಬೇಸಿಗೆ ಹಂಗಾಮಿನ ಬೆಳೆ ಸಮೀಕ್ಷೆ ದತ್ತಾಂಶದ ವಿವರಗಳನ್ನು ಈಗಾಗಲೇ ಪಹಣಿಗಳಲ್ಲಿ ಇಂದೀಕರಿಸಲಾಗಿದ್ದು, ಕೆಲವೊಂದು ತಾಂತ್ರಿಕ ತೊಡಕುಗಳಿಂದಾಗಿ ಪ್ರಸ್ತುತ ಬೆಳೆ ಸಮೀಕ್ಷೆ ವಿವರಗಳು ಪಹಣಿಗಳಲ್ಲಿ ಗೋಚರಿಸದೆ ಇರುವುದನ್ನು ಗಮನಿಸಲಾಗಿದ್ದು, ಸರಿಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಕೆಲವೊಂದು ಸರ್ವೆ ನಂಬರ್‌ಗಳಲ್ಲಿ ಬೆಳೆ ದಾಖಲು ಮಾಡಲು ಸಾಧ್ಯವಾಗದಿರುವುದು ಹಾಗೂ ಕೆಲವೊಂದು ಜಾಗದ ಬೆಳೆ ನಮೂದನ್ನು ಮತ್ತೊಂದು ಪ್ರದೇಶದಲ್ಲಿ ನಿಂತು ಮಾಡಬೇಕಾದ ಪರಿಸ್ಥಿತಿ ಮತ್ತು ಇನ್ನೂ ಹಲವಾರು ತಾಂತ್ರಿಕ ಸಮಸ್ಯೆಗಳು ಸದರಿ ಬೆಳೆ ನಮೂದು ಮಾಡುವಾಗ ಬೆಳೆಗಾರರಿಗೆ ಎದುರಾಗಿದ್ದು, ಈ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಇದುವರೆಗೆ ಏನು ಕ್ರಮ ಕೈಗೊಂಡಿದೆ: | ಬೆಳೆ ದಾಖಲು ಮಾಡುವಾಗ ಕೆಲವೊಂದು ಸರ್ವೆ ನಂಬರ್ ಗಳಲ್ಲಿ ತಾಂತ್ರಿಕ ದೋಷಗಳು ಕಂಡುಬಂದಿದ್ದು, ಉಪ ನಿರ್ದೇಶಕರು, ಭೂ ಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆ ಇವರಿಗೆ ತಾಂತ್ರಿಕ ದೋಷಗಳಿಂದ ಸಮೀಕ್ಷೆ ಕೈಗೊಳ್ಳಲಾಗದಂತಹ ಗ್ರಾಮ ನಕಾಶೆಗಳನ್ನು ರದ್ದುಪಡಿಸಲು ಕೋರಲಾಗಿದ್ದು, ಅದರಂತೆ, ತಾಂತ್ರಿಕ ದೋಷಗಳಿರುವ ಗ್ರಾಮಗಳ ನಕಾಶೆಗಳನ್ನು ರದ್ದು ಪಡಿಸಲಾಗಿರುತ್ತದೆ. |
| ಇ) | ಈ ಎಲ್ಲಾ ಸಮಸ್ಯೆಗಳನ್ನು ಈ ಕೂಡಲೇ ಸರಿಪಡಿಸಿ, ಈ ವರ್ಷದಲ್ಲಿ ಬೆಳೆಗಾರರು ಸರ್ಕಾರದ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುವಂತೆ ಕ್ರಮ ವಹಿಸಲಾಗುವುದೇ? | ಈ ಎಲ್ಲಾ ಸಮಸ್ಯೆಗಳನ್ನು ಈಗಾಗಲೇ ಸರಿಪಡಿಸಿ ಬೆಳೆಗಾರರು ಸರ್ಕಾರದ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುವಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಕೃಇ/165/ಕೃಕೈಉ/2021

(ಬಿ.ಸಿ. ಪಾಟೀಲ್)

ಕೃಷಿ ಸಚಿವರು